



# ಹೊಂಗನಸು




ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 24

| | | | | |
|---|---|---|---|---|
| ಸಂಪುಟ: ೦೩ ಸಂಚಿಕೆ: ೧೦ | ಜನವರಿ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
| Vol. 03 Issue 10 | January 2017 | Pages - 8 | A. Sub. - Rs. 20/- | Editor : Sri. B.R. Ravindranath |





## ಹೊಂಗನಸು ಓದುಗರಿಗೆ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಲ್ಲಾ ಸದಸ್ಯರಿಗೂ ಹೊಸ ವರ್ಷದ ಶುಭಾಶಯಗಳು

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನವೆಂಬರ್2016– ಡಿಸೆಂಬರ್2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ "ಲಿಫ್ಟ್" ಸೌಕರ್ಯದ ಅಳವಡಿಕೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸುಸಜ್ಜಿತ ಬಿ.ಎಂ.ಶ್ರೀ ಕಲಾಭವನದಲ್ಲಿ ಇದೀಗ ಮತ್ತೊಂದು ಸೌಲಭ್ಯವನ್ನು ಅಳವಡಿಸಲಾಗಿದೆ. ನಮ್ಮ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಹಾಗೂ ಇತರ ಕೆಲಸಗಳಿಗೆ ಭೇಟಿ ನೀಡುತ್ತಿರುವ ಬಹಳಷ್ಟು ಹಿರಿಯ ನಾಗರೀಕರಿಗೆ ಮಹಡಿ ಮೆಟ್ಟಿಲುಗಳನ್ನು ಹತ್ತಿಕೊಂಡು ಕಚೇರಿ ಹಾಗೂ ಶಾ ಬಾಲೂರಾವ್ ಮಾತಿನ ಮನೆ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ತೊಂದರೆಗಳು ಆಗುತ್ತಿತ್ತು. ಇದನ್ನು ಗಮನಿಸಿ ಪ್ರತಿಷ್ಠಾನದ ಪದಾಧಿಕಾರಿಗಳು ಲಿಫ್ಟ್ ಸೌಕರ್ಯವನ್ನು ಅಳವಡಿಸುವುದರ ಬಗ್ಗೆ ಚಿಂತನೆ ನಡೆಸುತ್ತಿದ್ದಾಗ ಈ ಬಗ್ಗೆ ಮಾಹಿತಿ ಪಡೆದ ಬಿ.ಎಂ.ಶ್ರೀ ಅವರ ಮೊಮ್ಮಗಳು ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ಅವರು ಸ್ವಯಂಪ್ರೇರಿತರಾಗಿ ಉದಾರವಾಗಿ ಕೊಡುಗೆ ನೀಡಿದರು. ಇದರ ಫಲವಾಗಿ ಬಹುದಿನಗಳಿಂದ ಎದುರು ನೋಡುತ್ತಿದ್ದ ಕನಸು ಸಾಕಾರಗೊಂಡಿರುತ್ತದೆ.



ದಿನಾಂಕ 4–12–2016ರಂದು ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನೂತನವಾಗಿ ಅಳವಡಿಸಲಾದ ಅತ್ಯಾಧುನಿಕ ತಂತ್ರಜ್ಞಾನಗಳನ್ನು ಒಳಗೊಂಡಿರುವ ಲಿಫ್ಟ್ ಸೌಕರ್ಯವನ್ನು ಉದ್ಘಾಟಿಸಿದರು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಾಹಿತ್ಯಿಕ ಚಟುವಟಿಕೆಗಳನ್ನು ನಡೆಸಲು ಸೂಕ್ತ ಸ್ಥಳವೆಂದು ಈಗಾಗಲೇ ಹೆಸರುವಾಸಿಯಾಗಿರುತ್ತದೆ. ಈಗ ಇಲ್ಲಿ ಮತ್ತಷ್ಟು ಕಾರ್ಯಕ್ರಮಗಳನ್ನು ನಡೆಸಲು ಸಾಧ್ಯವಾಗುತ್ತದೆ.




ಚಂದಾ ವಿವರಗಳು

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೪
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

## ಸಂಪಾದಕೀಯ

ಕಾಳಧನಿಕರ ದುರ್ವ್ಯವಹಾರಗಳನ್ನು ತಡೆಗಟ್ಟಲು ರೂ.1000 ಹಾಗೂ ರೂ. 500 ನೋಟುಗಳನ್ನು ನಿಷೇಧಿಸಿದ ನಂತರದ ಘಟನೆಗಳು ಮತ್ತು ಪ್ರಸಂಗಗಳು ನಮ್ಮ ಸಮಾಜದಲ್ಲಿರುವ ದುರ್ಬಲತೆಗಳನ್ನು ಎತ್ತಿ ತೋರಿಸುತ್ತಿವೆ. ಸಾಮಾನ್ಯವಾಗಿ ನಿಯಮಪಾಲನೆಗೆ ಬದ್ಧರಾದ ಸರ್ಕಾರಿ ಅಧಿಕಾರಿಗಳು, ಬ್ಯಾಂಕ್‌ಗಳ ಸಿಬ್ಬಂದಿ ವರ್ಗದವರು, ಕಾನೂನು ಪಾಲನೆಗಾಗಿಯೇ ನೇಮಕಗೊಂಡಿರುವ ಪೋಲಿಸರು ಹಾಗೂ ಎಳೆಯ ವಯಸ್ಸಿನಲ್ಲಿಯಾದರೂ ಆದರ್ಶಗಳಲ್ಲಿ ನಂಬಿಕೆಹೊಂದಿರಬೇಕಾದ ಯುವ ಜನರು ಇವರುಗಳು ಪುಡಿಗಾಸು ಆಸೆಗಾಗಿ ಕಾಳಧನಿಕರ ಕಪ್ಪು ಹಣವನ್ನು ಬಿಳುಪು ಮಾಡಲು ಅಧಿಕಾರ ದುರುಪಯೋಗ ಮಾಡಲು, ಹಿರಿಯರ ಬೋಧನೆಗಳನ್ನು ಮರೆತು ಆದರ್ಶಗಳನ್ನು ಬದಿಗೊತ್ತಲು ಹಿಂದೆ ಮುಂದೆ ನೋಡದಿರುವುದು ನಮಗೆಲ್ಲ ಖೇದ ಉಂಟು ಮಾಡುವ ಬೆಳವಣಿಗೆಯಾಗಿರುತ್ತದೆ.

ಉತ್ತಮ ಉದ್ಯೋಗಗಳು ದೊರಕುವುದೇ ದುಸ್ತರವಾಗಿರುವಾಗ ದೊರಕಿರುವ ಉತ್ತಮ ಉದ್ಯೋಗಗಳಿಗೆ ಸೂಕ್ತ ಮಟ್ಟದ ಗೌರವವನ್ನು ಹೊಂದಿ ಉದ್ಯೋಗದ ಸೇವಾಪಟ್ಟಿಯಲ್ಲಿ ಯಾವುದೇ ರೀತಿಯ ಕಪ್ಪು ಚುಕ್ಕೆ ಬರದಂತೆ ಶ್ರಮಿಸುವುದು ಎಲ್ಲಾ ಉದ್ಯೋಗಿಗಳ ಮೊದಲ ಕರ್ತವ್ಯವಾಗಿರುತ್ತದೆ. ಪ್ರತಿದಿನ ಶಾಂತಚಿತ್ತರಾಗಿ ಆತಂಕವಿಲ್ಲದೇ ಊಟ ಮಾಡಲು ಅನುವು ಮಾಡಿಕೊಡುವ ಉದ್ಯೋಗಕ್ಕೆ ಯಾವುದೇ ರೀತಿಯ ಸಂಚಕಾರವೂ ಬರದಿರುವಂತೆ ನೋಡಿಕೊಳ್ಳುವುದನ್ನು ಬಿಟ್ಟು ಇರುವ ಅಲ್ಪ ಮಟ್ಟದ ಅಧಿಕಾರ ಹಾಗೂ ಸ್ವಾತಂತ್ರ್ಯವನ್ನು ದುರುಳರಿಗೆ ಸಹಕಾರ ನೀಡುವಲ್ಲಿ ಬಳಸುವುದು ತಪ್ಪು ಎಂದು ನಾಲ್ಕು ಅಕ್ಷರ ಕಲಿತಿರುವ, ಹುಟ್ಟಿನಿಂದಲೂ ಧರ್ಮ ಕರ್ಮಗಳ ಬಗ್ಗೆ ಕೇಳಿಸಿಕೊಂಡು ಬೆಳೆದಿರುವವರೂ ತಿಳಿದುಕೊಳ್ಳದಿರುವುದು ನಮ್ಮ ಸಮಾಜದ ದುರದೃಷ್ಟ ಎಂದೇ ಹೇಳಬೇಕು.

ಇದೇ ಸಿದ್ಧಾಂತವನ್ನು ಉದ್ಯಮಿಗಳು ಹಾಗೂ ವರ್ತಕರಿಗೂ ಅನ್ವಯಿಸಬೇಕಾಗುತ್ತದೆ. ಈ ನಾಡಿನ ನೆಲ ಜಲ ಬಳಸಿಕೊಂಡು ನಾಡಿನ ಜನತೆಯ ಜೊತೆ ವ್ಯವಹರಿಸಿದ ಕಾರಣದಿಂದಲೇ ಹಣಗಳಿಕೆ ಸಾಧ್ಯವಾಗಿರುವುದನ್ನು ಸಂಪೂರ್ಣವಾಗಿ ಮರೆತು ನಾಡಿನ ಕಾನೂನು ನಿಯಮಗಳನ್ನು ಉಲ್ಲಂಘನೆ ಮಾಡುವ ಮನೋಭಾವವನ್ನು ಹಾಗೂ ಮೊಂಡು ಧೈರ್ಯವನ್ನು ಹೊಂದಲು ನಮ್ಮ ಸಮಾಜವೇ ಅವಕಾಶ ಮಾಡಿಕೊಟ್ಟಿರುವುದನ್ನು ನಾವು ಗುರುತಿಸಬೇಕಾಗಿದೆ. ತೆರಿಗೆಗಳ್ಳರು ಹಾಗೂ ಲಂಚಕೋರರರು ತಮ್ಮ ಅಪರಾಧವನ್ನು ಸರ್ಕಾರದ ವಿರುದ್ಧ ತಾನೆ ಮಾಡುವುದು, ನಮಗೇನೂ ತೊಂದರೆ ಮಾಡುವುದಿಲ್ಲ ಜೊತೆಗೆ ನಮಗೆ ಅನುಕೂಲ ಮಾಡಿಕೊಡುವ ಮಾರ್ಗವನ್ನೂ ತೋರಿಸುತ್ತಾರೆ ಎಂಬುದು ಬಹಳ ಜನರ ನಂಬಿಕೆಯಾಗಿರುತ್ತದೆ. ಸರ್ಕಾರ ಕೇವಲ ಆಡಳಿತ ಯಂತ್ರವನ್ನು ನಡೆಸುವ ಜವಾಬ್ದಾರಿಯನ್ನು ಹೊಂದಿರುತ್ತದೆ ಹಾಗೂ ತೆರಿಗೆಗಳ್ಳರು ಪಾವತಿಸಬೇಕಾದ ತೆರಿಗೆ ಹಣದಿಂದ ಆಗಬಹುದಾಗಿದ್ದ ಜನಕಲ್ಯಾಣದ ಕೆಲಸಗಳಿಗೆ ಕತ್ತರಿಬೀಳುತ್ತದೆ ಎಂಬುದನ್ನು ಬಹುತೇಕ ಜನ ಸಾಮಾನ್ಯರು ಗುರುತಿಸುವುದೇ ಇಲ್ಲ.

ಕಳ್ಳತನ, ಕೊಲೆ, ಮಾನಾಪಹರಣ ಇತ್ಯಾದಿ ಅಪರಾಧಗಳನ್ನು ನಮ್ಮ ಸಮಾಜ ತೀವ್ರವಾಗಿ ಪರಿಗಣಿಸುವ ರೀತಿಯಲ್ಲಿ ಲಂಚಕೋರತನ, ವ್ಯಾಪಾರ ಮೋಸಗಳು, ತೆರಿಗೆಗಳ್ಳತನಗಳ ಬಗ್ಗೆ ತೀವ್ರತೆ ಇಲ್ಲದೇ ಬದಲಾಗಿ ಉದಾರ ಮನೋಭಾವವನ್ನು ಹೊಂದಿರುವುದು  ನಮ್ಮ ಸಮಾಜದಲ್ಲಿನ ದುರ್ಬಲತೆ ಎಂದು ಗುರುತಿಸಬೇಕಾಗಿದೆ. ಈ ರೀತಿಯ ಉದಾರತೆಯ ದೌರ್ಬಲ್ಯವನ್ನು ಹೊರಹಾಕದ ಹೊರತು ಕಾಳಧನ, ಲಂಚ ಇತ್ಯಾದಿಗಳಿಂದ ನಮಗೆ ಬಿಡುಗಡೆ ಇರುವುದಿಲ್ಲ.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು......

## ‘ಚಿತ್ರ ಸಾಹಿತ್ಯ’ ಡಿಪ್ಲೊಮ

ಕನ್ನಡದಲ್ಲಿ ಈಗ ಚಲನಚಿತ್ರ ಸಾಹಿತ್ಯ ವಿಶಾಲ ವ್ಯಾಪ್ತಿಯನ್ನು ಪಡೆಯುತ್ತಿದ್ದು ‘ಕನ್ನಡ ಇನ್ನೂ ಅನ್ನ ಕೊಡುವಭಾಷೆಯಾಗಿದೆ’ ಎನ್ನುವುದನ್ನು ರುಜುವಾತುಪಡಿಸಿದೆ. ಚಲನಚಿತ್ರ, ಕಿರುತೆರೆ, ಸಾಕ್ಷ್ಯಚಿತ್ರ, ಜಾಹಿರಾತು – ಹೀಗೆ ಹಲವು ಕ್ಷೇತ್ರಗಳ ಸಾಹಿತ್ಯ ವಿಭಾಗವು ಸಾವಿರಾರು ಜನರಿಗೆ ಜೀವನೋಪಾಯವನ್ನು ಕಲ್ಪಿಸಿವೆ. ಕನ್ನಡದಲ್ಲೀಗ ವರ್ಷಕ್ಕೆ 150ಕ್ಕೂ ಹೆಚ್ಚು ಚಲನಚಿತ್ರಗಳು ನಿರ್ಮಾಣವಾಗುತ್ತಿದ್ದು, ಎಂಬತ್ತು ಕಿರುತೆರೆ ಧಾರಾವಾಹಿಗಳೂ ಪ್ರಸಾರವಾಗುತ್ತಿವೆ. ಅಲ್ಲದೆ ಇನ್ನೂ ಹಲವು ವಾಹಿನಿಗಳು ಕಾರ್ಯಾರಂಭ ಮಾಡಲಿದ್ದು ಅಲ್ಲೆಲ್ಲಾ ಚಿತ್ರ ಸಾಹಿತ್ಯಕ್ಕೆ ಬೇಡಿಕೆ ಇದ್ದೇ ಇದೆ. ಇದಲ್ಲದೆ ಎಫ್.ಎಂ.ಕೇಂದ್ರಗಳು, ಸಾಮಾಜಿಕ ಜಾಲತಾಣಗಳು, ರಿಯಾಲಿಟಿ ಶೋಗಳು, ಕಾರ್ಪೋರೇಟ್ ಸಂಸ್ಥೆಗಳು ಎಲ್ಲೆಡೆ ಇಂದು ಹೊಸ ಬಗೆಯ ಬರಹಗಾರರಿಗೆ ಅವಕಾಶಗಳಿವೆ. ಆದರೆ ಅನೇಕ ಆಸಕ್ತ ಪ್ರತಿಭಾವಂತರು ಹೊಸ ಅವಕಾಶಗಳ ಅರಿವಿಲ್ಲದೆ ಅಥವಾ ಮಾಧ್ಯಮದ ಅಗತ್ಯಕ್ಕೆ ಹೊಂದಿಕೊಳ್ಳಲಾಗದೆ ಅವಕಾಶ ವಂಚಿತರಾಗುತ್ತಿದ್ದಾರೆ.

ಈ ಹಿನ್ನಲೆಯಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಚಿತ್ರಕಥೆ, ಸಂಭಾಷಣೆ, ಕಿರುತೆರೆ, ಸಾಕ್ಷಚಿತ್ರಗಳ ಸಾಹಿತ್ಯ ರಚನೆ, ಚಿತ್ರಗೀತೆಗಳ ರಚನೆ ಸೇರಿದಂತೆ ‘ಚಿತ್ರಸಾಹಿತ್ಯ’ವನ್ನು ಕುರಿತು ಸಮಗ್ರ ತರಬೇತಿ ನೀಡುವ ಡಿಪ್ಲೊಮ ಕೋರ್ಸ್ ಒಂದನ್ನು ರೂಪಿಸಿದ್ದು. ಈ ಕ್ಷೇತ್ರದಲ್ಲಿ ಹಿರಿಯ ತಜ್ಞರುಗಳಾದ  ಗಿರೀಶ್ ಕಾಸರವಳ್ಳಿ, ಟಿ.ಎಸ್.ನಾಗಾಭರಣ, ಪಿ.ಶೇಷಾದ್ರಿ, ಎನ್.ವಿದ್ಯಾಶಂಕರ್ ಮೊದಲಾದ ವಿವಿಧ ಕ್ಷೇತ್ರಗಳ ಪರಿಣತರು  ವಿಶೇಷ ತರಬೇತಿ ನೀಡಲಿದ್ದು ವೀರಪ್ಪ ಮರಳವಾಡಿ, ಶ್ರೀಪತಿ ಮಂಜಿನಬೈಲು, ಎನ್.ಎಸ್.ಶ್ರೀಧರ ಮೂರ್ತಿ ಈ ಕೋರ್ಸ್‌ನ ಹೊಣೆಗಾರಿಕೆ ನಿರ್ವಹಿಸಲಿದ್ದಾರೆ. ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಹತ್ವದ ಕೊಡುಗೆ ನೀಡಿರುವ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ‘ಚಿತ್ರಸಾಹಿತ್ಯ’ ಕುರಿತವಿಶೇಷ ಡಿಪ್ಲೊಮ ಕೋರ್ಸ್ ಒಂದನ್ನು ರೂಪಿಸಿದ್ದು, ಅಕಾಡಮಿಕ್ ಆಗಿ ಈ ಹೊಸ ಬಗೆಯ ಸಾಹಿತ್ಯವನ್ನು ಗುರುತಿಸಿದ ಮೊದಲ ಪ್ರಯತ್ನವಾಗಿದೆ.

1979 ರಲ್ಲಿ ಪ್ರೊ| ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿ, 80 ರಲ್ಲಿ ಶ್ರೀ ಕುವೆಂಪು ಅವರಿಂದ ಉದ್ಘಾಟನೆಗೊಂಡ ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನವು ಮೂವತ್ತೇಳು ವರ್ಷಗಳಿಂದ ಸಂಶೋಧನೆ ಮತ್ತು ವಿದ್ವತ್ತುಗಳ ಬಗ್ಗೆ ಹೆಚ್ಚಿನ ಒತ್ತು ನೀಡುತ್ತಿದ್ದು, ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದ ಸಂಶೋಧನ ಸಂಸ್ಥೆಯಾಗಿ ಕನ್ನಡ ಎಂ.ಫಿ.ಲ್ ತರಗತಿಗಳನ್ನು ನಡೆಸುತ್ತಲೂ ಪಿಎಚ್.ಡಿ ಅಭ್ಯರ್ಥಿಗಳಿಗೆ ಮಾರ್ಗದರ್ಶನವನ್ನು ಒದಗಿಸುತ್ತಲೂ ಇರುವುದಲ್ಲದೆ, ಸುಸಜ್ಜಿತ ಗ್ರಂಥಭಂಡಾರ ಹಾಗೂ ಒಂದು ಸಾವಿರಕ್ಕೂ ಹೆಚ್ಚಿನ ಓಲೆಗರಿ ಕಟ್ಟುಗಳ ಸಂರಕ್ಷಣೆ ಮತ್ತು ಡಿಜಿಟಲೀಕರಣ ಕಾರ್ಯಗಳನ್ನು ನಡೆಸುತ್ತ, ‘ಕರ್ನಾಟಕಲೋಚನ’ ಎಂಬ ಆರು ತಿಂಗಳ ವಿದ್ವತ್ ಪತ್ರಿಕೆ, ‘ಹೊಂಗನಸು’ ಹೆಸರಿನ ಪ್ರತಿ ತಿಂಗಳ ವಾರ್ತಪತ್ರಿಕೆ ಹಾಗೂ ನೂರಾರು ಮೌಲಿಕ ಗ್ರಂಥಗಳನ್ನು ಹೊರತರುತ್ತ, ಪ್ರತಿ ತಿಂಗಳೂ ಕನಿಷ್ಠ ಆರು ಸಾಹಿತ್ಯಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತ ಕ್ರಿಯಾಶೀಲವಾಗಿದೆ. ಇದೀಗ ‘ಚಿತ್ರಸಾಹಿತ್ಯ’ ಡಿಪ್ಲೊಮ ಆಯೋಜಿಸಿ ಹೊಸ ಬರವಣಿಗೆಯ ಕಡೆಗೂ ಗಮನ ಹರಿಸುವ ಐತಿಹಾಸಿಕ ಪ್ರಯತ್ನ ಮಾಡುತ್ತಿದೆ.ಪ್ರತಿಷ್ಠಾನದ ಮೂರು ಮಹಡಿಗಳ ಸ್ವಂತ ಕಟ್ಟಡದಲ್ಲಿ ತರಗತಿ ಕೊಠಡಿಗಳು ಹಾಗೂ ಸುಸಜ್ಜಿತ ಸಭಾಂಗಣವೊಂದಿದ್ದು ಈ ಹೊಸ ಪ್ರಯತ್ನವನ್ನು ನಿರ್ವಹಿಸಲು ಸಜ್ಜಾಗಿದೆ.ಮುಖ್ಯವಾಗಿ ಕನ್ನಡ ಬರವಣಿಗೆಯಲ್ಲಿ ಆಸಕ್ತ ವಿದ್ಯಾರ್ಥಿಗಳ ಅಗತ್ಯವನ್ನು ಗಮನದಲ್ಲಿರಿಸಿಕೊಂಡಿರುವ ಈ ಕೋರ್ಸ್ ನಾಲ್ಕು ತಿಂಗಳಿನ ಅವಧಿಯದಾಗಿದ್ದು ಕಾರ್ಯಶೀಲ ಯುವಜನತೆಗೆ ಅನುಕೂಲವಾಗುವಂತೆ ತರಗತಿಗಳು ಸಂಜೆಯ ವೇಳೆ ನಡೆಯುತ್ತವೆ.

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ: ದೂರವಾಣಿ: 080–26615877 / 26676773

## ಜನವರಿ 2017 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ**





### 4–01–2017 ಬುಧವಾರ ಸಂಜೆ– 6–00

ಶ್ರೀ ಸಾಹಿತ್ಯ ಪ್ರಶಸ್ತಿ ಪ್ರದಾನ ಸಮಾರಂಭ.
ಪ್ರಶಸ್ತಿ ಪ್ರದಾನ ಮಾಡುವವರು– ಡಾ॥ ಮನುಬಳಿಗಾರ್
ಪ್ರಶಸ್ತಿ ಪುರಸ್ಕೃತರು– ನಾಡೋಜ ಡಾ॥ ಕಮಲಾ ಹಂಪನಾ
ಅಭಿನಂದನೆ ನುಡಿಗಳು : ಡಾ॥ಎಲ್.ಜಿ. ಮೀರಾ (ಖ್ಯಾತ ವಿಮರ್ಶಕರು)

**ಸ್ಥಳ : ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್, ಬಿ.ಪಿ. ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು–4**



### 6–01–2017 ಶುಕ್ರವಾರ ಸಂಜೆ–6–00

ಶ್ರೀಮತಿ ರಂಗನಾಯಕಮ್ಮ ಮತ್ತು ಶ್ರೀ ಸುಬ್ಬರಾವ್ ದತ್ತಿ ಕಾರ್ಯಕ್ರಮ
ದೇವರ ನಾಮ ಗಾಯನ
ಕುಮಾರಿ ತೇಜಸ್ವಿನಿ ಗೌರಿ ಮತ್ತು ಸಂಗಡಿಗರು





### 7–01–2017 ಶನಿವಾರ ಸಂಜೆ–6–00

ಗಮಕವಾಹಿನಿ–12
ಕುಮಾರ ವ್ಯಾಸಭಾರತದಿಂದ 'ದ್ರೌಪದಿ ವಿಜಯ'
ನಡೆಸಿಕೊಡುವವರು : ಶ್ರೀಮತಿ ಜಯರಾಂ, ರೇಖಾ ಪ್ರಸಾದ್, ಶ್ರೀದೇವಿ ಅಯ್ಯಂಗಾರ್,
ಹರಿಣಿ ಕೃಷ್ಣಪ್ರಸಾದ್, ಹೇಮಾ ರವಿಶಂಕರ, ದೀಪ್ತಿ ನೇತೃತ್ವ– ಶ್ರೀಮತಿ ಜಯರಾಂ





### 13–01–2017 ಶುಕ್ರವಾರ ಸಂಜೆ–6–00

ಕನ್ನಡ ಸಂಸ್ಕೃತಿ ದರ್ಶನ
ಸಾಕ್ಷ್ಯಚಿತ್ರ ಪ್ರದರ್ಶನ : ದ.ರಾ.ಬೇಂದ್ರೆ. ಅವರ ಕುರಿತು






### 15–01–2017 ಭಾನುವಾರ ಬೆಳಿಗ್ಗೆ – 10–30

ದಿ॥ ಬಿ.ಎಸ್. ಗೋಪಾಲರಾವ್ – ಶ್ರೀಮತಿ ವೇದವತಿ ಬಾಯಿ ದತ್ತಿ ಕ್ರಾರ್ಯಕ್ರಮ
ಗಮಕ ವ್ಯಾಖ್ಯಾನ : ರನ್ನನ ಗದಾಯುದ್ಧದ ಆಯ್ದ ಭಾಗಗಳ
ವಾಚನ – ಶ್ರೀ ಚಂದ್ರಶೇಖರ ಕೆದಿಲಾಯ
ವ್ಯಾಖ್ಯಾನ – ಶ್ರೀಮತಿ ಶಾಂತಗೋಪಾಲ್



### 17–01–2017 ಮಂಗಳವಾರ ಸಂಜೆ –6–00

ಅಕ್ಕರಗೊಟ್ಟಿ
ಚಾಲನೆ : ಶ್ರೀ ಎಂ.ಎನ್. ಪ್ರಭಾಕರ್
ವಿಷಯ – ಅಗ್ರಹಾರಗಳು ಮತ್ತು ಅದರ ಪೂರ್ವಾ ಪರಗಳು



### 22–01–2017 ಭಾನುವಾರ ಬೆಳಿಗ್ಗೆ 10–30

ಶ್ರೀ ಕೆ. ಮೋಹನ್ ದೇವ್ ಆಳ್ವ ಮತ್ತು ಡಾ॥ ಎಂ.ಕೆ. ಶೈಲಜಾ ಆಳ್ವ ದತ್ತಿ ಸ್ಪರ್ಧೆ
'ದೇವರನಾಮ ಹಾಡುಗಾರಿಕೆ ಸ್ಪರ್ಧೆ'






### 28–01–2017 ಶನಿವಾರ ಸಂಜೆ 6 ಗಂಟೆಗೆ

'ರಂಗಸಂವಾದ–6'
ನಾಟಕ– ಕ್ರೆಡಿಟ್ ಕಾರ್ಡ್ ಬೇಕೆ?
ರಚನೆ – ಶ್ರೀ ಬಿ.ಆರ್. ರವೀಂದ್ರನಾಥ್
ನಿರ್ದೇಶನ – ಶ್ರೀ ವಿಜಯ್.ಎ.

### 27,28,29–01–2017 'ಮೋಡಿಲಿಪಿ' ಕಾರ್ಯಾಗಾರ

ಕರ್ನಾಟಕ ಇತಿಹಾಸ ಅಕಾಡೆಮಿಯ ಸಹಯೋಗದೊಂದಿಗೆ

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನವೆಂಬರ್ – ಡಿಸೆಂಬರ್ 2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ಶಾ. ಬಾಲೂರಾವ್ ಅನುವಾದ ಮತ್ತು ಯುವ ಬರಹಗಾರ ಪ್ರಶಸ್ತಿ ಪ್ರದಾನ

### ಪ್ರಶಸ್ತಿ ಪ್ರದಾನ ಹಾಗೂ ಅಧ್ಯಕ್ಷತೆ : ಡಾ.ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ಪ್ರಶಸ್ತಿ ಪುರಸ್ಕೃತರು
ಯುವಬಹರಗಾರ ಪ್ರಶಸ್ತಿ : ಶ್ರೀ ಸತ್ಯಮಂಗಲಮಹಾದೇವ
ಅನುವಾದ ಪ್ರಶಸ್ತಿ : ಶ್ರೀ ವಸುಧೇಂದ್ರ



ಕೃತಿ ಪರಿಚಯ
1. ಶ್ರೀ ಸತ್ಯಮಂಗಲಮಹಾದೇವ ಅವರ ಕೃತಿ :ಯಾರ ಹಂಗಿಲ್ಲ ಬೀಸುವ ಗಾಳಿಗೆ : ಪ್ರೊ. ಟಿ. ಯಲ್ಲಪ್ಪ
2. ಶ್ರೀ ವಸುಧೇಂದ್ರ ಅನುವಾದಿಸಿರುವ ಎವರೆಸ್ಟ್ : ಶ್ರೀ ಎಚ್. ಎಸ್. ಸತ್ಯನಾರಾಯಣ

ದಿನಾಂಕ 4–12–2016ರಂದು ಶಾ. ಬಾಲೂರಾವ್ ಅನುವಾದ ಮತ್ತು ಯುವ ಬರಹಗಾರ ಪ್ರಶಸ್ತಿ ಪ್ರದಾನ ಕಾರ್ಯಕ್ರಮವನ್ನು ನಡೆಸಲಾಯಿತು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರತಿಷ್ಠಿತ ಕಾರ್ಯಕ್ರಮಗಳಲ್ಲಿ ಒಂದಾದ ಈ ಕಾರ್ಯಕ್ರಮದಲ್ಲಿ ಡಾ.ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ ಅವರು ಪ್ರಶಸ್ತಿಗಳನ್ನು ನೀಡಿದರು. ಈ ಪ್ರಶಸ್ತಿಗಳನ್ನು ಸ್ಥಾಪಿಸಿರುವ ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ಈ ಕಾರ್ಯಕ್ರಮದಲ್ಲಿ ಹಾಜರಿದ್ದರು.

ಮೊದಲಿಗೆ ಡಾ, ಪಿ.ವಿ. ನಾರಾಯಣ ಅವರು ಪ್ರಸ್ತಾವಿಕ ನುಡಿಗಳನ್ನು ಆಡಿ ಈ ಪ್ರಶಸ್ತಿಗಳ ಹಿನ್ನಲೆ ಹಾಗೂ ಇತರ ವಿವರಗಳನ್ನು ನೀಡಿದರು. ಪ್ರಶಸ್ತಿ ಪುರಸ್ಕೃತರ ಬಗ್ಗೆ ಹಾಗೂ ಅವರ ಕೃತಿಗಳು ಮತ್ತು ಸಾಧನೆಗಳ ಬಗ್ಗೆ ಪ್ರೊ. ಟಿ. ಯಲ್ಲಪ್ಪ ಹಾಗೂ ಶ್ರೀ ಎಚ್. ಎಸ್. ಸತ್ಯನಾರಾಯಣ ಅವರು ವಿವರಗಳನ್ನು ನೀಡಿದರು. ಪ್ರಶಸ್ತಿ ಪುರಸ್ಕೃತರಾದ ಶ್ರೀ ಸತ್ಯಮಂಗಲಮಹಾದೇವ ಅವರು ಮಾತನಾಡಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿ ಪ್ರಶಸ್ತಿಗೆ ಅವರನ್ನು ಆಯ್ಕೆ ಮಾಡಿದ್ದಕ್ಕೆ ಧನ್ಯವಾದಗಳನ್ನು ತಿಳಿಸಿದರು .ಶ್ರೀ ವಸುಧೇಂದ್ರ ಅವರ ಅನುಪಸ್ಥಿತಿಯಲ್ಲಿ ಅವರ ಪ್ರತಿನಿಧಿಯಾದ ಶ್ರೀ ಪದ್ಮನಾಭ ಭಟ್ ಶೇವ್ಕಾರ್ ಅವರು ಪ್ರಶಸ್ತಿಯನ್ನು ಪಡೆದು ಶ್ರೀ ವಸುಧೇಂದ್ರ ಬರೆದು ಕಳುಹಿಸಿದ ಸಂದೇಶವನ್ನು ಓದಿದರು.ಡಾ.ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ ಅವರು ಮಾತನಾಡಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಹಾಗೂ ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ಅವರನ್ನು ಶ್ಲಾಘಿಸಿದರು. ಪ್ರೊ ಎಂ. ಹೆಚ್. ಕೃಷ್ಣಯ್ಯ ಅವರು ಸಭೆಯನ್ನು ಉದ್ದೇಶಿಸಿ ಮಾತನಾಡಿದರು. ಪ್ರಶಸ್ತಿಗಳ ವಾಚನವನ್ನು ರವೀಂದ್ರನಾಥ ನಡೆಸಿಕೊಟ್ಟರು. ಪ್ರೊ. ಜಿ. ಅಬ್ದುಲ್ ಬಷೀರ್ ಅವರು ವಂದನಾರ್ಪಣೆ ಮಾಡಿದರು.
ಕಾರ್ಯಕ್ರಮವು ಭೋಜನದೊಂದಿಗೆ ಮುಕ್ತಾಯಗೊಂಡಿತು.

## “ರಂಗ ಸಂವಾದ–4”

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ
ನಾಟಕ :“ಭಾಷೆಯನ್ನು ಬಳಸು(ವ)ತ್ತಾ “
ರಚನೆ ಮತ್ತು ನಿರ್ದೇಶನ : ಶ್ರೀ ವಿಜಯ್ .ಎ
ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ ‘ರಂಗ ಸಂವಾದ’ ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ.26–11–2016 ರಂದು ಈ ಮಾಲೆಯ ನಾಟಕ ಕನ್ನಡ ಭಾಷೆಯ ಬಳಕೆ ಕುರಿತಾದ “ಭಾಷೆಯನ್ನು ಬಳಸು(ವ)ತ್ತಾ” ಎಂಬ ನಾಟಕದ ಪ್ರದರ್ಶನ ಮಾಡಲಾಯಿತು



## 28–11–2016 ಸೋಮವಾರ ಸಂಜೆ : 6:00 ಗಂಟೆಗೆ ತೀ.ನಂ.ಶ್ರೀ ಸ್ಮಾರಕ ವಿಶೇಷೋಪನ್ಯಾಸ

ವಿಷಯ :‘ತೀನಂಶ್ರೀ : ಭಾಷೆಯ ಬಗೆಗಿನ ಒಳನೋಟಗಳು’
ಡಾ. ಅಮೃತ ಅವರು ಸ್ಥಾಪಿಸಿರುವ ತೀ.ನಂ.ಶ್ರೀ ಸ್ಮಾರಕ ವಿಶೇಷೋಪನ್ಯಾಸದಲ್ಲಿ ಡಾ. ಹೆಚ್ ಶಶಿಕಲಾ ಅವರು ಭಾಷೆಯ ಬಗ್ಗೆ ಹಲವು ವಿಚಾರಗಳನ್ನು ತಿಳಿಸಿದರು. ತೀ.ನಂ.ಶ್ರೀ ಅವರದ್ದು ಸಾಹಿತ್ಯ ಕ್ಷೇತ್ರದಲ್ಲಿ ಹಲವು ಮುಖಗಳು. ಕವಿತೆ, ಛಂದಸ್ಸು, ವ್ಯಾಕರಣ, ಕಾವ್ಯ ಮೀಮಾಂಸೆ ಇತ್ಯಾದಿ. ಅವರು ಭಾರತೀಯ ಕಾವ್ಯ ಮೀಮಾಂಸೆಯಿಂದಲೇ ಹೆಸರು ಮಾಡಿದವರು.



ಛಂದಸ್ಸು ಮತ್ತು ಭಾಷೆಯ ಬಗ್ಗೆಯೂ ವಿಶೇಷ ಕೆಲಸ ಮಾಡಿದ್ದಾರೆ.ಎಂದು ಡಾ. ಹೆಚ್ ಶಶಿಕಲಾ ಅವರು ತಿಳಿಸಿದರು. ತೀ.ನಂ.ಶ್ರೀ. ಲೇಖನ ಮತ್ತು ಟಿಪ್ಪಣಿಗಳ ಮೂಲಕವೇ ಬರವಣಿಗೆ ಹೆಚ್ಚುಮಾಡಿರುವುದು ಹಾಗೂ ಕೆಲವು ಲೇಖನಗಳು ಪ್ರಕಟವಾಗಿವೆ, ಕೆಲವು ಆಗಿಲ್ಲಎಂದು ತಿಳಿಸಿದರು.

ಶಬ್ದಮಣಿದರ್ಪಣ ಕುರಿತು ತೀ.ನಂ.ಶ್ರೀ ಅವರು ಬರೆದ ಟಿಪ್ಪಣಿಗಳು ಇನ್ನೂ ನನ್ನ ಬಳಿ ಇವೆ ಎಂದು ತೀ.ನಂ.ಶ್ರೀ ಅವರ ಪುತ್ರರಾದ ಪ್ರೊ. ಟಿ.ಎಸ್. ನಾಗಭೂಷಣ ಅವರು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಡಾ. ಕೆ.ಪಿ.ಭಟ್ ಅವರು ಡಾ. ಹೆಚ್ ಶಶಿಕಲಾ ಅವರ ಉಪನ್ಯಾಸಕ್ಕೆ ಪೂರಕವಾಗಿ ಅನೇಕ ಅರ್ಥಪೂರ್ಣವಾದ ವಿಷಯಗಳನ್ನು ಮಂಡಿಸಿದರು.

ತೀ.ನಂ.ಶ್ರೀ ಪ್ರತಿಭೆ ಬೇರೆ ಬೇರೆ ಕ್ಷೇತ್ರಗಳಿಗೆ ಹರಡಿಕೊಂಡಿದೆ. ಭಾಷೆಯ ಬಗ್ಗೆ ಬರೆದ ಅವರ ಲೇಖನಗಳು ಕೆಲವೇ ಇದ್ದರೂ ಅವು ಅರ್ಥಪೂರ್ಣವಾಗಿವೆ. ಭಾಷಾ ವಿಜ್ಞಾನ ಕ್ಷೇತ್ರ ಅವರ ಕಾಲದಲ್ಲಿ ಕಣ್ಣು ಬಿಡುತ್ತಿತ್ತು. ತೀ.ನಂ.ಶ್ರೀ ಅವರ ಆಗಿನ ಕಾಲದ ವಿಚಾರಗಳು ಈ ಕಾಲದ ನಮಗೆ ಹೊಸದಾಗಿ ಕಾಣಿಸುತ್ತಿವೆ. ಅವರ ಕನ್ನಡ ಮಧ್ಯಮ ವ್ಯಾಕರಣ ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳಿಗೆ ಬರೆದದ್ದು. ಅದು ತುಂಬ ಉಪಯುಕ್ತ ಕೃತಿ. ಕೆಲವು ಮಿತಿಗಳ ನಡುವೆಯೂ ಆ ವ್ಯಾಕರಣ ಕಾಲೇಜು ವಿದ್ಯಾರ್ಥಿಗಳಿಗೂ ತುಂಬ ಪ್ರಯೋಜನಕಾರಿಯಾದುದು. ಆ ಕಾಲದಲ್ಲಿ ಕನ್ನಡ ಭಾಷೆಯನ್ನು ಸಂಸ್ಕೃತ ಭಾಷೆಯ ಹಿನ್ನಲೆಯಲ್ಲೇ ನೋಡುತ್ತಿದ್ದರು. ಉದಾಹರಣೆಗಳೂ ಅಷ್ಟೆ. ಆ ಕಾಲದ ಕನ್ನಡ ಭಾಷೆಯನ್ನು ಇಟ್ಟುಕೊಂಡು ಇಂತಹ ವ್ಯಾಕರಣಗಳು ರಚನೆಯಾಗಿವೆ. ಕನ್ನಡದ ಉದಾಹರಣೆಗಳನ್ನೇ ನೀಡಿದ್ದಾರೆ. ಕನ್ನಡಕ್ಕೆ ಮಾತ್ರವಲ್ಲ ಇಡೀ ದ್ರಾವಿಡ ಭಾಷೆಗಳಿಗೆ ಅನ್ವಯಿಸಿ ನೋಡಬಹುದಾದ ಅತ್ಯುತ್ತಮ ವ್ಯಾಕರಣ ಗ್ರಂಥ ಇದು ಎಂದು ಕೆ.ಪಿ. ಭಟ್ ಅವರು ತಿಳಿಸಿದರು.

**ತೀ.ನಂ. ಶ್ರೀಕಂಠಯ್ಯ :** ಜನನ: 26 ನವೆಂಬರ್ 1906, ತುಮಕೂರು ಜಿಲ್ಲೆಯ ತೀರ್ಥಪುರ, ಶಿಕ್ಷಣ: ಮಹಾರಾಜಾ ಕಾಲೇಜಿನಲ್ಲಿ ಬಿ.ಎ., 1929ರಲ್ಲಿ ಇಂಗ್ಲಿಷ್ ಎಂ.ಎ., 1931ರಲ್ಲಿ ಕನ್ನಡ ಎಂ.ಎ., 1928ರಲ್ಲಿ ಅಧ್ಯಾಪಕರಾಗಿ ವೃತ್ತಿ ಪ್ರಾರಂಭ, 1962ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನಿವೃತ್ತಿ. 1955–56ರಲ್ಲಿ ಅಮೆರಿಕದ ಮಿಚಿಗನ್ ಮತ್ತು ಪೆನ್ಸಿಲ್ವೇನಿಯಾ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ. 1958ರಲ್ಲಿ ಕನ್ನಡ ನಿಘಂಟು ಸಮಿತಿ ಅಧ್ಯಕ್ಷರು. ನಿಧನ: 1966ರ ಸೆಪ್ಟೆಂಬರ್ 7ರಂದು ಕಲ್ಕತ್ತಾದಲ್ಲಿ, 'ಭಾರತೀಯ ಕಾವ್ಯ ಮೀಮಾಂಸೆ' ಕೃತಿಗೆ 1989ರ ಪಂಪ ಪ್ರಶಸ್ತಿ (ಮರಣೋತ್ತರ).

ಸಾಹಿತ್ಯಪಥ: ಒಲುಮೆ (1932) ಬಿಡಿಮುತ್ತು (ಮುಕ್ತಕಗಳ ಅನು: 1970) ಪ್ರಬಂಧ: ನಂಟರು (1963) ನಾಟಕ: ರಾಕ್ಷಸನ ಮುದ್ರಿಕೆ (1942) ವಿಮರ್ಶೆ/ ಕಾವ್ಯ ಮೀಮಾಂಸೆ: ಭಾರತೀಯ ಕಾವ್ಯ ಮೀಮಾಂಸೆ (1953) ಪಂಪ (1939) ಕಾವ್ಯ ಸಮೀಕ್ಷೆ (1947) ಸಮಾಲೋಕನ (1958) ಕಾವ್ಯಾನುಭವ (1970) ಶಾಸ್ತ್ರ : ಕನ್ನಡ ಮಧ್ಯಮ ವ್ಯಾಕರಣ (1939) ಸಂಪಾದನೆ: ಹೆಣ್ಣುಮಕ್ಕಳ ಪದಗಳು (1941), ಹರಿಹರ ಕವಿಯ ನಂಬಿಯಣ್ಣನ ರಗಳೆ (1947), ರನ್ನ ಕವಿಯ ಗದಾಯುದ್ಧ ಸಂಗ್ರಹ (1949).
ಇಂಗ್ಲಿಷ್‌ನಲ್ಲಿ :Imagination in Indian Poetics and Other Literary Papers Affricates in Kannada Speech and Other Linguistic Papers (1994).
ಇಂಗ್ಲಿಷ್ ಅನುವಾದ: Indian Poetics (2000 Tr. by N. Balasubramanya.)

## ಗಮಕವಾಹಿನಿ–11 7–12–2016



07–12–2016ರಂದು ಪ್ರತಿ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಅಡಿಯಲ್ಲಿ ನರಹರಿ ಕವಿಯ ತೊರವೆ ರಾಮಾಯಣದಿಂದ ಆಯ್ದ ಚೂಡಾಮಣಿ ಪ್ರದಾನ ಎಂಬ ಕಥಾ ಭಾಗವನ್ನು ಶ್ರೀ ವಾಗ್ದೇವಿ ಗಮಕ ಕಲಾ ಪತಿಷ್ಠಾನದ ವಿದ್ಯಾರ್ಥಿಗಳು ಗಮಕರೂಪಕದ ಮೂಲಕ ಪ್ರಸ್ತುತ ಪಡಿಸಿದರು.ಸಿರಿ, ಸಿಂಚನ, ನಿತ್ಯಶ್ರೀ, ಶರಧಿ, ಕೃಷ್ಣ ಸ್ವರೂಪ, ಆದಿತ್ಯ ಇವರುಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಶ್ರೀಮತಿ ಸಿ.ವಿ.ಶ್ರೀಮತಿ ಅವರ ನೇತೃತ್ವದಲ್ಲಿ ನಡೆಸಿಕೊಟ್ಟರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ 14ನೇ ಡಿಸೆಂಬರ್ 2016 ರಂದು ರಾಷ್ಟ್ರ ಕವಿ ಕುವೆಂಪು ಅವರ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಕುವೆಂಪು ಅವರು ಡಿಸೆಂಬರ್ ತಿಂಗಳಿನಲ್ಲಿ ಜನಿಸಿದ್ದರು. ಅವರ ನೆನಪಿನಲ್ಲಿ ಈ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

## ಅಕ್ಕರಗೊಟ್ಟಿ

(ತಿಂಗಳ ಮುಕ್ತ ಸಾಂಸ್ಕೃತಿಕ ಚಿಂತನೆ)
ದಿನಾಂಕ 20–12–2016
ವಿಷಯ:ವ್ಯಾಸ ಮತ್ತು ಮಹಾಭಾರತ
ಚಾಲನೆ :ಶ್ರೀ ಶ್ರೀನಿವಾಸ ಮೂರ್ತಿ



ವ್ಯಾಸ ಯಾರು? ಎಂಬ ವಿಚಾರದ ಬಗ್ಗೆ ಶ್ರೀನಿವಾಸ ಮೂರ್ತಿ ಚರ್ಚೆಯನ್ನು ಪ್ರಾರಂಭಿಸಿದರು. ವ್ಯಾಸನೆಂದರೆ ವ್ಯಕ್ತಿಯ ಹೆಸರೋ ಅಥವಾ ಅದು ಒಂದು ಬಿರುದೋ? ವೇದವನ್ನು ವಿಭಾಗ ಮಾಡಿದವರು – ವ್ಯಾಸ. ಒಂದೊಂದು ಯುಗದಲ್ಲಿ – ಕಲ್ಪದಲ್ಲಿ ಒಬ್ಬೊಬ್ಬ ವ್ಯಾಸ ಕಂಡುಬರುತ್ತಾರೆ. ಅದರಂತೆ 27 ಜನ ವ್ಯಾಸರಿದ್ದಾರೆ.
ಸ್ವಯಂಭೂ – ಪ್ರಜಾಪತಿ – ಉಶನ – ಬ್ರಹಸ್ಪತಿ – ಸವಿತ್ರ ಹೀಗೆ 27 ವ್ಯಾಸರು, ಕೃಷ್ಣ ದ್ವೈಪಾಯನ ಎಂಬುವವನು 28ನೇ ವ್ಯಾಸ.
ದ್ವಾಪರಯುಗದಲ್ಲಿ ಅಶ್ವಥಾಮ ವ್ಯಾಸನಾಗುವ ಒಂದು ಕಲ್ಪನೆ. ಇದನ್ನು ದೈವಿ ಭಾಗವತ, ವಿಷ್ಣು ಪುರಾಣ, ಶಿವಪುರಾಣ ಮೊದಲಾದ ಪುರಾಣಗಳಲ್ಲಿ ಹೇಳಿದೆ. ಮಹಾಭಾರತ ರಚಿಸಿದವರು ಪರಾಶರ ಮಗನಾದ ವ್ಯಾಸ.
ಸತ್ಯವತೀಸುತ, ಪರಾಶರ್ಯ, ಬಾದರಾಯಣ ಹೀಗೆ ಹಲವಾರು ಹೆಸರುಗಳು ವ್ಯಾಸರಿಗಿದೆ. ಹಾಗಾದರೆ ವ್ಯಾಸರೆಂದರೆ ಯಾರು? ಈ ಕುರಿತು ಅರ್ಥಪೂರ್ಣ ಚರ್ಚೆ ನಡೆಯಿತು. ಈ ಚರ್ಚೆಯಲ್ಲಿ ಶ್ರೀ ಸುಬ್ರಮಣ್ಯ, ಶ್ರೀರಾಮಮೂರ್ತಿ, ಡಾ॥ ಲಕ್ಷ್ಮೀನಾರಾಯಣ, ಡಾ॥ ಎಂ.ಜಿ.ನಾಗರಾಜ್, ಪ್ರೊ ಅಶ್ವತ್ಥನಾರಾಯಣ, ಡಾ॥ ಪಿ.ವಿ. ನಾರಾಯಣ, ಪ್ರೊ॥ ಅಬ್ದುಲ್ ಬಷೀರ್, ಶ್ರೀ ಗುರುಪ್ರಸಾದ್, ಪ್ರೊ. ಶೇಷಗಿರಿರಾವ್, ಶ್ರೀ ವೆಂಕಟರಮಣಯ್ಯ, ಶ್ರೀಮತಿ ನಳಿನಿ ವೆಂಕಟೇಶ್, ಶ್ರೀಮತಿ ಭಾರತಿ ಮುಂತಾದವರು ಭಾಗವಹಿಸಿದ್ದರು.

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

**ಕಾಡು2:** ಕಾಡು ಎಂಬ ಕ್ರಿಯಾಪದಕ್ಕೆ ಪೀಡಿಸು ಎಂಬ ಅರ್ಥವಿದೆ. 'ಶಬ್ದಮಣಿದರ್ಪಣ'ವು "ಕಾಡು–ಅವಹೇಳನೇ" ಎನ್ನುತ್ತದೆ."ಪೆಂಡತಿಯಾಗೆಂದು ಕೈಯಂ ಪಿಡಿದು ಕಾಡುತ್ತಿರ್ಪನ್ನೆಗಂ" ಎಂಬುದು 'ವಡ್ಡಾರಾಧನೆ'ಯ ಮಾತು."ಕೋಡಗಂ ಜೋಡಾಡಿ ಕಾಡುತಿರ್ಪುದುಂ" ಎಂಬುದು ದುರ್ಗಸಿಂಹನ 'ಪಂಚತಂತ್ರ'ದ ಮಾತು. "ಇಂದ್ರಿಯ ನಿಗ್ರಹವ ಮಾಡಿದಡೆ ಹೊಂದುವವು ದೋಷಂಗಳು, ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು' ಎಂಬುದು ಬಸವಣ್ಣನ ಮಾತು. ಇನ್ನೊಂದು ಕಡೆ "ಮಾಡಿದೆನೆಂಬುದು ಮನದಲ್ಲಿ ಹೊಳೆದಡೆ ಏಡಿಸಿ ಕಾಡಿತ್ತು ಶಿವನ ಡಂಗುರ" ಎಂಬ ಅವನದೇ ಮಾತಿದೆ. "ಕಾಡಿ ಬೇಡಿ ಉಂಬವರೆಲ್ಲರು ಬ್ರಹ್ಮನ ಸಂಪ್ರದಾಯ" ಎಂದು ಅಲ್ಲಮ ಹೇಳುತ್ತಾನೆ. "ಗೋಪಿಕೆಯರ ಸೆರಗ ಹಿಡಿದು ಕಾಡುತ್ತಿದ್ದ ನಿತ್ಯವೂ ಗೋಪಾಲಕೃಷ್ಣ ಅಡಿಗರ 'ನನ್ನ ಅವತಾರ' ಕವನದ ಸಾಲು.

'ಕಾಡು' ಶಬ್ದದ ನಾಮರೂಪವೇ ಕಾಟ.ತೊಂದರೆ ಅಥವಾ ಪೀಡೆ ಎಂಬುದು ಈ ಶಬ್ದದ ಅರ್ಥ. "ಗಣಿಕೆಯರ ಕಡೆಗಣ್ಣ ನೋಟಕ್ಕಂ ಕಾಟಕ್ಕಂ ಅಳ್ಕದ" ಎಂದು 'ಪಂಪಭಾರತ'ದಲ್ಲಿದೆ. "ನರಿಯ ಕಾಟಕ್ಕೆ ಬೇಸತ್ತುವೊಂದು ದಿವಸಮಾ ನರಿಯಂ ಕೊಲಲುಪಾಯಮಂ ಕಂಡು" ಎಂಬ ಮಾತು 'ಪಂಚತಂತ್ರ'ದ್ದು.

'ಕಾಟ' ಎಂಬುದು ಒಂದು ಕ್ಷುದ್ರದೈವದ ಹೆಸರು."ವರಮೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೊಟಿದೆಯ್ವಂಗಳ್" ಎಂಬುದು ಬ್ರಹ್ಮಶಿವನ 'ಸಮಯ ಪರೀಕ್ಷೆ'ಯ ಪ್ರಶ್ನೆ.ಇದನ್ನು ವ್ಯಕ್ತಿನಾಮವಾಗಿಯೂ ಬಳಸುತ್ತಿದ್ದರು.'ಶಬ್ದಮಣಿದಪ ರ್ಣ'ದಲ್ಲಿ "ಅಂಕಿತನಾಮಕ್ಕೆ–ಕಾಟಂ, ಕಸವಂ, ದೂಡಿಗಂ" ಎಂದು ಉದಾಹರಣೆಗಳನ್ನು ಕೊಟ್ಟಿದೆ. ಪ್ರಾಯಶಃ ಇದರ ಮತ್ತೊಂದು ರೂಪ 'ಕಾಟುಗ'."ಕಾಟುಗ ಕೆತ್ತುಗ ಪೋಲುಗ" ಎಂಬುದು ಎನ್ನ ಹೆಸರು" –ಈ ಸಾಲು ಬಸವಣ್ಣನ ಒಂದು ವಚನದ್ದು. 'ಕಾಟಿ' ಎಂಬುದು ಸ್ತ್ರೀ ಕ್ಷುದ್ರದೇವತೆ: "ಹೂಂಕೃತಿಗೈವ ಭೈರವಂ ನೊಸಲುಗಣ್ಣನಾಳ್ವ ಚೌಡೇಶ್ವರಿ ಕೂಂಕಿಜೆದಾರ್ವ ಕಾಟಿಯುಂ" ('ಪಾರ್ಶ್ವನಾಥಪುರಾಣ').

ಕಾಟಕ ಎಂದರೆ ಕಾಟ ಕೊಡುವವನು: "ಕೌರವರ್ ಕಾಟಕರ ಸೊಲ್ಲುಗಳ್ಕೇಳ್ದು" ಎಂಬ ಮಾತು 'ತುರಂಗಭಾರತ'ದಲ್ಲಿದೆ. ಕಾಟಕ ಎಂದರೆ ಬೇಟೆಗಾರ ಎಂಬರ್ಥವೂ ಇದೆ; ಕಾಟನಾಯಕ ಎಂಬ ಹೆಸರು ಸಾಮಾನ್ಯ; ಹಾಗೆಯೇ 'ಕಾಟಣ್ಣ' ಬೇಡರ ದೇವತೆ.ಕಾಟಕೊಡುವ ಸ್ವಭಾವವೇ 'ಕಾಟಕತನ'. 'ಕಾಟಕಾಯಿ' ಎಂದರೆ ಕೊಳ್ಳೆ ಅಥವಾ 'ದ–ರೋಡೆ': "ಆ ತುದಿಯಿನೀ ತುದಿವರಂ ಕಾಟಕಾಯಿಗಳನೆಬ್ಬಿಸದೆ ಬಿಡುವನೇನು" ಎಂಬುದು ಗೋವಿಂದ ಪೈ ಅವರ 'ಗೊಲ್ಗೊಥ'ದ ಸಾಲು. 'ಕಾಟಾಚಾರ' ಎಂಬುದು ಕಾಟ ತಪ್ಪಿಸಿಕೊಳ್ಳಲು ಮಾಡುವ ಕೆಲಸ. ಕಾಟ ಶಬ್ದವನ್ನೊಳಗೊಂಡ ಇಂತಹ ಇನ್ನೂ ಅನೇಕ ಶಬ್ದಗಳಿವೆ.

====

**ಕಾಲು:** ಇದೊಂದು ದ್ರಾವಿಡ ಪದವಾಗಿದ್ದು, ಕನ್ನಡ ತಮಿಳು ಮಲಯಾಳಂಗಳಲ್ಲಿ ಮೂಲರೂಪ ಕಾಲ್ ಎಂದೂ, ತೆಲುಗಿನಲ್ಲಿ ಕಾಲು ಎಂದೂ ತುಳುವಿನಲ್ಲಿ ಕಾರ್ ಎಂದೂ ಇದೆ. ಸಾಮಾನ್ಯವಾಗಿ, ಪ್ರಾಣಿಗಳ ಮೊಳಕಾಲಿನಿಂದ ಕೆಳಗಿನ ಭಾಗ ಎಂಬರ್ಥ ಈ ಶಬ್ದಕ್ಕಿದೆ."ಕೈಕಾಲ್ ನಡೆನುಡಿಯುಳ್ಳ ಮನುಷ್ಯನಿಂದೆಂತುಂ ಕಾರ್ಯಮುಂಟು" (ದುರ್ಗಸಿಂಹನ 'ಪಂಚತಂತ್ರ') ಎಂಬುದರಲ್ಲಿ ಇದು ಸ್ಪಷ್ಟವಾಗಿದೆ.ನಡೆಯಲು ತೊಡಗುವ ಮಗುವಿಗೆ 'ಕಾಲು ಬಂತು' ಎನ್ನುವುದು ವಾಡಿಕೆ. ಮಂಚ, ಸ್ಟೂಲು, ಮೇಜು ಮುಂತಾದವುಗಳನ್ನು ಹೊತ್ತ ಮರದ ತುಂಡುಗಳನ್ನೂ ಕಾಲ್ ಎನ್ನುತ್ತಾರೆ ("ಪಗೆವರಂ ಎನ್ನ ಮಂಚದ ಕಾಲೊಳ್ ಕಟ್ಟಿದೆಂ" – ಪಂಪಭಾರತ'). ಆದರೆ "ನಿಮ್ಮ ಕಾಲಂ ತೊಳೆವೆ" ಎಂಬ 'ವಡ್ಡಾರಾಧನೆ'ಯ ಪ್ರಯೋಗದಲ್ಲಿ ಇದಕ್ಕೆ ಪಾದವೆಂಬ ಅರ್ಥವಿದೆ. 'ಕಾಲೂಱು' ಎಂದರೆ ನೆಲೆನಿಲ್ಲು ಎಂದರ್ಥ ("ಕಾರಮುಗಿಲೊಡ್ಡು ಕಾಲೂಱಿದಂತಿರ್ಪುದು" – ಜನ್ನನ 'ಅನಂತನಾಥ ಪುರಾಣ').ಕಾಲನ್ನು ಪ್ರಾಣಿಗಳು ಮುಂದೆ ಹೋಗಲು ಬಳಸುವುದರಿಂದಾಗಿಯೋ ಏನೋ ಹರಿಯುವ ನದಿ ಹಳ್ಳ ಕಾಲುವೆಗಳಿಗೂ ಕಾಲ್ ಎಂಬರ್ಥ ಬಂತು ("ತೊಱೆ ಪೊರ್ದಿದ ಕಾಲ್ ತಾಂ ಕುಲ್ಯಾಪ್ವಂ" – 'ಅಭಿಧಾನ ವಸ್ತುಕೋಶ').ಕಾಲ್ ಈಗಿನ ಕಾಲುವೆ. ಕಾಲ್ಗಾಪು (ಕಾಲ್+ಕಾಪು) ಎಂದರೆ ಪದಾತಿ (ನಡೆಯುವ ಸೈನ್ಯ ಅಥವಾ ಸೈನಿಕ) ಎಂದರ್ಥ. ಕಾಲಾಳ್ ಎಂಬುದೂ ಇದೇ. ಹಳಗನ್ನಡದಲ್ಲಿ 'ಕಾಲ್ವಟ್ಟೆ' ಎಂದರೆ ಕಾಲು ದಾರಿ ("ಕಾಡೊಳಿರ್ದ ಕಾಲ್ವಟ್ಟೆಗಳೆಲ್ಲಂ ಎಯ್ದುವುವು ನೀರ್ನೆಲೆಯಂ" – 'ಸೂಕ್ತಿಸುಧಾರ್ಣವ'). ಇಂಗ್ಲಿಷ್‌ನ ಫುಟ್‌ಪಾತ್ ಎಂಬುದಕ್ಕೆ ಈಗ ಸಂವಾದಿ.'ಕಾಲಿಗೆ ಬೀಳು' ಎಂದರೆ ನಮಸ್ಕರಿಸು ಎಂದೂ, 'ಕಾಲುಹಿಡಿ' ಎಂದರೆ ಬೇಡಿಕೊ ಎಂದೂ ಅರ್ಥ. ಕಾಲಕಸ ಎಂದರೆ ಕೆಲಸಕ್ಕೆ ಬಾರದ್ದು ಎಂದರ್ಥ.'ಕಾಲಿಗೆ ಬುದ್ಧಿ ಹೇಳು' ಎಂದರೆ ಪಲಾಯನ ಮಾಡು ಎಂದರ್ಥ.

ಪ್ರಾಣಿಗಳು ನಿಲ್ಲುವುದು ನಾಲ್ಕು ಕಾಲುಗಳ ಮೇಲೆ; ಹೀಗಾಗಿಯೋ ಏನೋ ಕಾಲು ಎಂಬುದಕ್ಕೆ ನಾಲ್ಕನೇ ಒಂದು ಭಾಗ ಎಂದೂ ಅರ್ಥ ಬಂದಿದೆ.'ಓದು ಕಾಲು ಬುದ್ಧಿ ಮುಕ್ಕಾಲು' ಎಂಬುದೊಂದು ಗಾದೆ. ಕಾಲ್ ಎಂದರೆ ಚಿಕ್ಕ ಎಂಬ ಅರ್ಥವೂ ಇದೆ; ಕಾಲೂರ್ ಎಂದರೆ ಸಣ್ಣ ಹಳ್ಳಿ: "ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು.. ..ಕಾಲೂರ್ಗಳಿಂ ಕೆಯ್ಗಳಿಂ" (ಆಂಡಯ್ಯನ 'ಕಬ್ಬಿಗರ ಕಾವ').

=====

**ಕುದುರು:** ಕನ್ನಡದ ಈ ಶಬ್ದವು ಕಣಜ ಎಂಬರ್ಥದ ಸಂಸ್ಕೃತದ 'ಕೃದರ'ದ ತದ್ಭವ. ಕುದಿರ್, ಕುದಿರು ಕುದುರು ಮುಂತಾದ ರೂಪಗಳಲ್ಲಿ ಬಳಕೆಯಾಗಿರುವ ಇದರ ಅರ್ಥವು ಭಿನ್ನವಾಗಿದೆ. "ಕುಶೂಳಂ ಕುದಿರ್ ಅಱೆಗೆ" ಎನ್ನುತ್ತದೆ 'ಅಭಿಧಾನ ವಸ್ತುಕೋಶ'.ಬಿದಿರಿನ ತಟ್ಟಿಯನ್ನು ಗುಂಡಗೆ ಕಟ್ಟಿ ಮಣ್ಣು ಲೇಪಿಸಿದ ಕಣಜವೇ ಕುದುರು."ಕುದುರನೇಸು ತೊಳೆದಡೆಯೂ ಕೆಸರು ಮಾಬುದೆ?"ಎಂಬ ಬಸವಣ್ಣನ ಮಾತು ಇದನ್ನು ಸೂಚಿಸುತ್ತದೆ. ಕುದಿರ್ ಎಂಬುದಕ್ಕೆ ಗೋಡೆ ಎಂಬರ್ಥವೂ ಇದೆ: "ಕುದಿರೊಳ್ ಕಳ್ಳವನಿಕ್ಕಿಸಿ" – 'ಯಶೋಧರ ಚರಿತೆ). ದವಸವನ್ನು ಕುಟ್ಟುವಾಗ ಒರಳಿನಿಂದ ಹೊರಚೆಲ್ಲದಂತೆ ಇಡುತ್ತಿದ್ದ ಬಿದಿರು ಅಥವಾ ಮರದ ಸುತ್ತು ಕುದುರು. ಹಗ್ಗದ ಸಿಂಬೆಯನ್ನೂ ಕುದಿರು ಎಂಬ ಶಬ್ದ ಸೂಚಿಸುತ್ತದೆ. ಕಣ್ಣ ಕುದುರು ಎಂಬ ಸಮಾಸದಲ್ಲಿನ ಕುದುರು ಶಬ್ದಕ್ಕೆ ಕುಳಿ ಎಂಬ ಅರ್ಥವಿದೆ.ಕುದುರು ಎಂಬುದನ್ನು ನದಿಯ ಪಾತ್ರ ಎಂಬರ್ಥದಲ್ಲಿ ಕುವೆಂಪು 'ಶ್ರೀ ರಾಮಾಯಣ ದರ್ಶನಂ'ನಲ್ಲಿ ಬಳಸುತ್ತಾರೆ ("ಕೋಟಿ ಕಣ್ಣುಗಳೊಡ್ಡಿದೊಂದು ಕುದುರಿಗೆ ಕೆಡೆದು"). ತುಳುವಿನಲ್ಲಿ ಈ ಶಬ್ದಕ್ಕೆ ಸಣ್ಣದ್ವೀಪ ಎಂಬರ್ಥವಿದೆಯಂತೆ.ಕನ್ನಡದಲ್ಲೂ ಇದರ ಬಳಕೆಯಿದೆ.ಒರಳಿನ ಸುತ್ತ ಇರುವ ಕುದುರು ಎಂಬುದು ಇದರಿಂದ ಪ್ರೇರಿತವಾಗಿರಬಹುದೇ?

ನೆಲೆಯಾಗು ಎಂಬ ಕ್ರಿಯಾರ್ಥದಲ್ಲಿ ಕುದುರು ಎಂಬ ಶಬ್ದ ಬಳಕೆಯಾಗುತ್ತದೆ.ತಮಿಳಿನಲ್ಲಿದು ಕುದಿರ್ ಆದರೆ ತೆಲುಗಿನಲ್ಲಿ ಕುದುರು ಎಂದೂ ತುಳುವಿನಲ್ಲಿ ಕುದುರುಣಿ ಎಂದೂ ಆಗುತ್ತದೆ. ಸ್ತಿಮಿತಕ್ಕೆ ಬರು ಎಂಬರ್ಥವೂ ಇದಕ್ಕಿದೆ. "ವ್ಯಾಪಾರ ಕುದುರಿತು" ಎಂಬಂತಹ ಕಡೆ ಇದನ್ನು ಕಾಣಬಹುದು.

ಪರಿಚಯ

## ನಾಡೋಜ ಡಾ॥ಕಮಲಾ ಹಂಪನಾ



ಪರಿಚಯ : 2016ರ ಶ್ರೀಸಾಹಿತ್ಯ ಪ್ರಶಸ್ತಿಗೆ ಕನ್ನಡದ ಖ್ಯಾತ ಸಾಹಿತಿಗಳು ನಿವೃತ್ತ ಕನ್ನಡ ಪ್ರಾಧ್ಯಾಪಕರು ಆದ ನಾಡೋಜ ಡಾ॥ ಕಮಲಾ ಹಂಪನಾ ಅವರು ಆಯ್ಕೆ ಆಗಿದ್ದಾರೆ. ಮಹಿಳಾ ಸಾಹಿತಿಗಳಲ್ಲಿ ಅತ್ಯಂತ ದೊಡ್ಡ ಹೆಸರು ಅವರದು. 55ಕ್ಕೂ ಹೆಚ್ಚು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಸಂಶೋಧನೆ, ವಿಮರ್ಶೆ, ಆಧುನಿಕ ವಚನಗಳು, ಜೀವನ ಚರಿತ್ರೆ, ಮಕ್ಕಳ ಸಾಹಿತ್ಯ, ಮುಂತಾದ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಸಭೆ, ಸಮಾರಂಭ, ವಿಚಾರ ಗೋಷ್ಠಿ ಮುಂತಾದ 20ಕ್ಕೂ ಹೆಚ್ಚು ಕ್ಷೇತ್ರಗಳಲ್ಲಿ ಪಾಲ್ಗೊಂಡಿರುತ್ತಾರೆ. 71ನೆಯ ಅಖಿಲಭಾರತ (ಮೂಡಬಿದರೆ) ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯ ಗೌರವವು ಲಭಿಸಿತ್ತು.

**ಶ್ರೀ ಎಸ್.ವಿ. ಶ್ರೀನಿವಾಸ ರಾವ್ ಅವರು ಸ್ಥಾಪಿಸಿರುವ 'ಪುಟ್ಟಚ್ಚಮ್ಮ–ಸಾರಂಗಿ ವೆಂಕಟರಾಮಯ್ಯ' ದತ್ತಿ ಪುಸ್ತಕ ಬಹುಮಾನವು ಈ ಬಾರಿ ಶ್ರೀ ಎಚ್. ನಾಗರಾಜ್ ಹಳ್ಳಿಕಾರ್ ಅವರ 'ಈಚಲ ಗುಡ್ಡ' ಎಂಬ ನಾಟಕಕ್ಕೆ ದೊರೆತಿದೆ.**

**ಆ ಬಹುಮಾನವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ 28–12–2016ರಂದು ಬುಧವಾರ ನಡೆಯುವ ಸಮಾರಂಭದಲ್ಲಿ ವಿತರಿಸಲಾಗುವುದು.**

## ಶ್ರೀ ಕೆ.ಮೋಹನ್ ದೇವ್ ಆಳ್ವ– ಡಾ.ಎಂ.ಕೆ.ಶೈಲಜ ಆಳ್ವ ಸಂಗೀತ ಸ್ಪರ್ಧೆ.

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು 25 ವರ್ಷ ವಯಸ್ಸಿನವರಿಗೆ 'ದೇವರನಾಮ ಗಾಯನ ಸ್ಪರ್ಧೆಯನ್ನು' 22–01–2017ರಂದು ಏರ್ಪಡಿಸಿದೆ. ಈ ಗಾಯನ ಸ್ಪರ್ಧೆಯಲ್ಲಿ ಪಾಲ್ಗೊಳ್ಳಲು ಬಯಸುವವರು ದಿನಾಂಕ : 05–1–2017ರೊಳಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, 3ನೇ ಮುಖ್ಯರಸ್ತೆ, ಎನ್. ಆರ್. ಕಾಲೋನಿ, ಬೆಂಗಳೂರು –560019, ಇಲ್ಲಿ ಹೆಸರನ್ನು ನೋಂದಾಯಿಸಿ ಕೊಳ್ಳಬೇಕು. ದಿನಾಂಕ : 22–1–2017, ಭಾನುವಾರ ಬೆಳಗ್ಗೆ 10–30ಗಂಟೆಗೆ ನಡೆಯುವ ಸಮಾರಂಭದಲ್ಲಿ ವಿಜೇತರಿಗೆ ನಗದು ಬಹುಮಾನಗಳನ್ನು ನೀಡಲಾಗುವುದು.ದೂರವಾಣಿ : 080–26615877

ಪ್ರಥಮ ಬಹುಮಾನ : ರೂ. 3,000/–
ದ್ವಿತೀಯ ಬಹುಮಾನ : ರೂ.2,000/–
ತೃತೀಯ ಬಹುಮಾನ : ರೂ. 1,000/–

### ಪ್ರಕಟಣೆ

ಶ್ರೀಮತಿ ಕಮಲಿನಿ ಶಾ.ಬಾಲೂರಾವ್ ಅವರು ಸ್ಥಾಪಿಸಿರುವ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಕಳೆದ ಎರಡು ವರ್ಷಗಳಿಂದ ಕೊಡಮಾಡುತ್ತ ಬಂದಿರುವ 'ಶ್ರೀ ಸಾಹಿತ್ಯ ಪ್ರಶಸ್ತಿ'ಗೆ ಈ ವರ್ಷ(2016) ಒಟ್ಟು ಸಾಹಿತ್ಯವನ್ನು ಗುರುತಿಸಿ ನಾಡೋಜ ಡಾ॥ಕಮಲಾಹಂಪನಾ ಅವರನ್ನು ಆಯ್ಕೆ ಸಮಿತಿಯು ಸರ್ವಾನುಮತದಿಂದ ಆರಿಸಿದೆ. ಆಯ್ಕೆ ಸಮಿತಿಯಲ್ಲಿ ಡಾ॥ ನಲ್ಲೂರು ಪ್ರಸಾದ್, ಡಾ॥ ಮಲ್ಲೇಪುರಂ ಜಿ.ವೆಂಕಟೇಶ್ ಮತ್ತು ಡಾ॥ಎಲ್. ಜಿ.ಮೀರಾ ಅವರುಗಳಿದ್ದರು. ಪ್ರಶಸ್ತಿಯು ಒಂದು ಲಕ್ಷ ರೂಪಾಯಿಗಳ ನಗದು, ಸ್ಮರಣಿಕೆ, ಶಾಲು ಮುಂತಾದವುಗಳನ್ನು ಒಳಗೊಂಡಿರುತ್ತದೆ. ಪ್ರಶಸ್ತಿ ಪ್ರದಾನದ ವಿಶೇಷ ಸಮಾರಂಭವು ಬಿ.ಎಂ.ಶ್ರೀ.ಅವರ ಹುಟ್ಟುಹಬ್ಬದ ದಿನವಾದ ಜನವರಿ 4, 2017ರಂದು ಬೆಂಗಳೂರಿನ ಬಸವನಗುಡಿಯ ಇಂಡಿಯನ್ ಇನ್ಸಿಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ಸಂಜೆ 6–00ಕ್ಕೆ ನಡೆಯಲಿದೆ.

### ಜನವರಿ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಚದುರಂಗ ಎಂ. ಸುಬ್ರಹ್ಮಣ್ಯರಾಜು | 1–1–1916 |
| ಬಿ.ಎಂ.ಶ್ರೀ | 3–1–1884 |
| ವ್ಯಾಕರಣ ತೀರ್ಥ ಚಂದ್ರ ಶೇಖರ ಶಾಸ್ತ್ರಿಗಳು | 3–1–1892 |
| ಶಂ. ಭಾ. ಜೋಷಿ | 4–1–1896 |
| ಗಳಗನಾಥರು | 5–1–1869 |
| ನಾ. ಕಸ್ತೂರಿ ಸಂಸ | 14–1–1898 |
| ಶಾಂತಕವಿ (ಸಕ್ಕರಿ ಬಾಳಾಚಾರ್ಯ) | 15–1–1856 |
| ಆರ್. ಸಿ. ಹಿರೇಮಠ | 15–1–1920 |
| ಸುರಂ ಎಕ್ಕುಂಡಿ | 20–1–1923 |
| ಕೆ.ಎಸ್. ನರಸಿಂಹಸ್ವಾಮಿ | 26–1–1915 |

### ಜನವರಿ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಹರ್ಡೇಕರ್ ಮಂಜಪ್ಪ | 3–1–1947 |
| ರಾಶಿ (ಡಾ. ಎಂ ಶಿವರಾಂ) | 13–1–1984 |
| ಮುಳಿಯ ತಿಮ್ಮಪ್ಪಯ್ಯ | 16–1–1950 |
| ಕೆರೂರ ವಾಸುದೇವಾಚಾರ್ಯ | 21–1–1921 |
| ಬಿ ಪುಟ್ಟಸ್ವಾಮಯ್ಯ | 25–1–1984 |
| ಪಿ.ಲಂಕೇಶ್ | 25–1–2000 |

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

**ನುಡಿಯಲ್ಲೊಂದು ಭಾವ, ನಡೆಯಲ್ಲೊಂದು ಭಾವ
ಅಹರ್ನಿಷಿಯಲೊಂದೊಂದು ಭಾವವೇಕಯ್ಯಾ!
'ಆಚಾರವೇ ಸ್ವರ್ಗ, ಅನಾಚಾರವೇ ನರಕವೆಂಬುದು
ಸುಳ್ಳಲ್ಲವಯ್ಯಾ!
ಇದ್ದರಿರಬೇಕು ಮುಹಮ್ಮದ್ (ಸ) ಪೈಗಂಬರರಂತೆ
ಇದ್ದಿರಿರಬೇಕು ಬಸವಣ್ಣನವರಂತೆ
ಇದ್ದರಿರಬೇಕು ಏಸುಕ್ರಿಸ್ತನಂತೆ
ಇದ್ದರಿರಬೇಕು ಪುರಂದರ ಕನಕರಂತೆ
ಇದ್ದರಿರಬೇಕು ಮಹಾತ್ಮಗಾಂಧಿಯಂತೆ
ಇದ್ದರಿರಬೇಕು ಅಂಬೇಡ್ಕರರಂತೆ
ಸಕಲ ಜಗತ್ತಿನಲ್ಲಿ ಇಂಥ ಅಣ್ಣಂದಿರ–
ದರ್ಶನವ ಮಾಡಿಸು 'ಅಲ್ಲಾರಖಾ' ನಿನ್ನ ಕೃಪೆ. ॥15॥**

# ಬಿ ಎಂ ಶ್ರೀ ಪ್ರತಿಷ್ಠಾನದ ಪ್ರಕಟಣೆಗಳ ಕಿರುಪರಿಚಯ

**ಇಂಗ್ಲಿಷ್‌ಗೀತೆಗಳು :** ಮೂಲ ಆಂಗ್ಲ ಕವನಗಳೊಂದಿಗೆ
(ತೃತೀಯ ಮುದ್ರಣ2013) ಪು.xvi+192 ಬೆಲೆ ರೂ. 100/–

19ನೇ ಶತಮಾನದ ಉತ್ತರ ಭಾಗದಲ್ಲಿಇಂಗ್ಲಿಷ್ ಸಾಹಿತ್ಯದ ಪರಿಚಯ ಲಾಭವನ್ನು ಪಡೆದ ಸಾಹಿತಿಗಳು ಜಡಗಟ್ಟಿದ ಸಂಪ್ರದಾಯ ಮಾರ್ಗವನ್ನುತೊರೆದು ಹೊಸ ಮಾರ್ಗದಲ್ಲಿ ಕಾವ್ಯ ರಚನೆ ಮಾಡಬೇಕು, ಮಾಡಿಸಬೇಕು ಎಂಬ ಉತ್ಕಟಪ್ರೇರಣೆ ಹೊಂದಿದ್ದರು. 'ಶ್ರೀ'ಯವರು ಇದೇ ಪಂಕ್ತಿಗೆ ಸೇರಿದವರು, 'ಇಂಗ್ಲಿಷ್ ಗೀತೆಗಳು' ಸಂಕಲನವನ್ನು 1926ರಲ್ಲಿ ಹೊರತಂದರು, ಹೆಸರು ಭಾವ ಮುಂತಾದವು ಕನ್ನಡತನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಪದಪ್ರಯೋಗ, ಶೈಲಿ, ಛಂದಸ್ಸು, ಭಾವಗಳು ಮೂಲ ಕವಿಯ ವ್ಯಕ್ತಿತ್ವವನ್ನು ಅನುಸರಿಸಿದೆ. 'ಶ್ರೀ' ಯವರ ಮನಸ್ಸಿಗೆ ಒಪ್ಪಿಬಂದ ಇಂಗ್ಲಿಷ್ ಕವಿತೆಗಳನ್ನು ಆಯ್ಕೆ ಮಾಡಿ ಕನ್ನಡೀಕರಿಸಲಾಗಿತ್ತು. ಪ್ರಸ್ತುತ ಸಂಕಲನದಲ್ಲಿ 60 ಅನುವಾದಿಸಿದ ಕನ್ನಡ ಕವಿತೆಗಳಿದ್ದು ಅವುಗಳ ಇಂಗ್ಲಿಷ್ ಮೂಲ ರೂಪವನ್ನೂ ಒದಗಿಸಲಾಗಿದೆ. ಇದು ಕನ್ನಡ ನವೋದಯ ಕಾವ್ಯದ ಆಚಾರ್ಯ ಕೃತಿ.

**ಸೃಜನ ಸಾಹಿತ್ಯ**
(ಎಂ. ವಿ. ಸೀ ವಾಚಿಕೆ – 1)
ಸಂಪಾದಕರು: ಶ್ರೀಧರ ಮೂರ್ತಿಎನ್. ಎಸ್
ಪು.xiv+292 ಬೆಲೆ ರೂ 150/– ಪ್ರಕಟಣೆ2012

ಎಂ. ವಿ. ಸೀ ಯವರದು ಬಹುಮುಖೀ ಆಸಕ್ತಿಗಳುಳ್ಳ ವ್ಯಕ್ತಿತ್ವ. ಅವರ ಸಾಹಿತ್ಯದ ಬಹಳ ಮುಖ್ಯವಾದಧೋರಣೆ ಸಾಮಾಜಿಕ ಸಮನ್ವಯ ಕುರಿತಾದದ್ದು. ಶ್ರೀಯುತರು ಬರವಣಿಗೆಯನ್ನು ಮಾಡಿದ ಅವಧಿ ಹೊಸಗನ್ನಡ ಸಾಹಿತ್ಯದ ಮೊದಲ ಹಂತ. ಪ್ರಾಚೀನ ಸಾಹಿತ್ಯದ ಅಧ್ಯಯನ, ವ್ಯಾಖ್ಯಾನ ಮತ್ತು ಮರುಮೌಲ್ಯ ಮಾಪನವನ್ನು, ಹೊಸ ಮಾರ್ಗದ ಸಾಧ್ಯತೆಗಳನ್ನು ಎಂ. ವಿ. ಸೀ ಯವರು ತಮ್ಮ ಕೃತಿಗಳಲ್ಲಿ ರೂಪಿಸಿದರು. ಪ್ರಸ್ತುತ ಗ್ರಂಥಗಳು ಎಂ. ವಿ. ಸೀ ಯವರ ಸಾಹಿತ್ಯವನ್ನು ಕಥೆಗಳು, ಕಾವ್ಯ, ಕಾದಂಬರಿಗಳು, ನಾಟಕ, ಮಕ್ಕಳ ಸಾಹಿತ್ಯ, ಪ್ರಬಂಧಗಳು ಎಂದು ಆರು ಶೀರ್ಷಿಕೆಗಳಡಿಯಲ್ಲಿ ವಿಮರ್ಶಿಸಲಾಗಿದೆ. ಈ ಕೃತಿ ಎಂ. ವಿ. ಸಿ ಅವರ ಸಾಹಿತ್ಯ ಶೈಲಿಯನ್ನು, ತೌಲನಿಕ ಅಧ್ಯಯನದ ಹೊಳಹನ್ನು ಅರಿಯಲು ಅನುಕೂಲವಾಗುತ್ತದೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Published & posted 30th of every month**
**Date of posting : 30-12-2016**

## ೨೦೧೬ ಡಿಸೆಂಬರ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ಈ ತಿಂಗಳಿನಲ್ಲಿ ೫೨ ಗ್ರಂಥಗಳ ಶುಷ್ಕ ಶುದ್ದೀಕರಣ, ೫೨ ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, ೧೬ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೫೨ ಗ್ರಂಥಗಳಿಗೆ ಅಟ್ಟೆ ಕಟ್ಟಿದ ಕಾರ್ಯ, ೧೫೦ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ, ಮತ್ತು ೧೬ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ.

ಡಾ॥ ಎನ್.ಆರ್. ಲಲಿತಾಂಬ, ಉಪನ್ಯಾಸಕರು, ವಿಜಯನಗರದ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಅವರು ಕನ್ನಡ ಸ್ನಾತಕೋತ್ತರ ವಿಭಾಗದಿಂದ ೨೮ ವಿದ್ಯಾರ್ಥಿಗಳ ತಂಡದೊಂದಿಗೆ ನಮ್ಮ ಹಸ್ತ ಪ್ರತಿ ಸಂಗ್ರಹಾಲಯಕ್ಕೆ ದಿನಾಂಕ ೨೪-೧೧-೨೦೧೬ ರಂದು ಭೇಟಿ ನೀಡಿದ್ದರು. ಶ್ರೀ ಗುರುಪ್ರಸಾದ್, ಹಸ್ತಪ್ರತಿ ಸಂರಕ್ಷಕರು ವಿದ್ಯಾರ್ಥಿ ವೃಂದವನ್ನು ಸ್ವಾಗತಿಸಿ, ತಾಳೆಗರಿಗಳ ಉಗಮ, ಹದ ಮಾಡುವ ಕ್ರಮ, ಕೊರೆಯುವ ಸಾಧನಗಳು, ಕೊರೆಯುವ ರೀತಿ, ಪ್ರಾಚೀನ ಸಂರಕ್ಷಣಾ ವಿಧಾನಗಳು ಮತ್ತು ಪ್ರಸ್ತುತ ಪ್ರತಿಷ್ಠಾನದಲ್ಲಿ ಕೈಗೊಳ್ಳುತ್ತಿರುವ ಸಂರಕ್ಷಣಾ ವಿಧಾನಗಳ ಪ್ರಾತ್ಯಕ್ಷಿತೆಯನ್ನು ನೀಡಲಾಯಿತು. ನಂತರ ವಿದ್ಯಾರ್ಥಿಗಳಿಗೆ ಡಿಜಿಟಲೈಜೇಷನ್ ವಿಧಾನಗಳನ್ನು ತೋರಿಸಲಾಯಿತು, ಹಾಗೂ ಡಿಜಿಟೈಸ್ ಮಾಡಿದ ಕೆಲವು ಗ್ರಂಥಗಳನ್ನೂ ತೋರಿಸಲಾಯಿತು.

ಕಾಲೇಜು ವಿದ್ಯಾರ್ಥಿಗಳು ನೀಡಿದ ಐನೂರು ರೂಪಾಯಿಗಳನ್ನು ಪ್ರತಿಷ್ಠಾನದ ಮೂಲ ದೇಣಿಗೆ ಖಾತೆಗೆ ಸ್ವೀಕರಿಸಲಾಯಿತು.

ನಮ್ಮ ಸದಸ್ಯರಾದ ಶ್ರೀಮತಿ ಎಸ್,ವೈ. ನಿರ್ಮಲಾ ಅವರು ಹಸ್ತಪ್ರತಿ ಸಂರಕ್ಷಣೆಗಾಗಿ ಒಂದು ವೀರಶೈವ ಗ್ರಂಥವನ್ನು ನೀಡಿದ್ದು, ಸಂರಕ್ಷಣಾ ಕಾರ್ಯವು ಪೂರೈಸಿದೆ. ಅದರಿಂದ ಕಾರ್ಯವು ಪೂರೈಸಿದೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.............................................................................................

.............................................................................................

.............................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭